# ಉದ್ಘೋಷ

ಸ್ವಾತಂತ್ರ್ಯ ದಿನ

೧೫—೮—೧೯೪೭



ಬೆಲೆ:- ೦—೧೨—೦.

ಪ್ರಕಾಶಕರು:—

ಬಾಳಿಗಾ ಎಂಡ್ ಸನ್ಸ್, ರಥಬೀದಿ, ಮಂಗಳೂರು.

ನಮ್ಮ ಮಾತೃ ಭೂಮಿಯ
ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡಿ
ಬಿದ್ದೂ ಇದ್ದೂ ಹುತಾತ್ಮರಾದ
ಜ್ಞಾತಾಜ್ಞಾತರೆಲ್ಲ
ಭ್ರಾತೃಭಗಿನಿಯರ
ನೆನಪಿಗಾಗಿ
ಅರ್ಪಣೆ



Printed at the Mangalore Press, P. I. C. No. S. K. 48.
For Baliga & Sons P. I. C No. S. K. 38.
January 1947.

# ಬಿಡುಗಡೆಗೆ

ಬಿಡುಗಡೆಯೆ! ದೇವರಿನಣಂ ಕಿರಿಯ ದೇವತೆಯೆ!
ಭಾರತಕೆ ಬಾರ, ನರನೆರಡನೆಯ ತಾಯೆ!
ಋದ್ಧಿಬುದ್ಧಿಗಳಕ್ಕನೆಂದು ಸಂಭಾವಿತೆಯೆ,
ನೀನೆಲ್ಲಿ ಶಾಂತಿಯಲ್ಲಿದೆ ನಿನ್ನ ಛಾಯೆ!

ಯೂರೋಪದಾವ ಗುಣಕೊಲಿದಲ್ಲಿ ನೀ ನಿಂತು
ಮಿಕ್ಕಿಳೆಯನವರ ತುಳಿಗಾಲ್ಗೆ ಬಾಗಿಸಿದೆ?
ಆಶ್ಯದಾನವಗುಣಕೆ ಮುಳಿದಕಟ ನೀನಿಂತು
ತೊರೆದೆಮ್ಮ ಕೋಟಿ ನಡೆಗೊಂಬೆಯಾಗಿಸಿದೆ?

ಕಾಡುಬೇರೆಮಗೂಡು! ಮಾಡೆಮಗೆ ಗವಿ ಬೀಡು!
ನೀಡು ಬಿಲ್ಲಂಬುಗಳ ಬತ್ತಲೆಯ ಬಾಳು!
ನೀನಾವರೆಂದೆಂದು ಬಿಡದೆ ನಮ್ಮೊಡನಾಡು—
ನೀನಿಲ್ಲದಕಟ ಬಾಳಲ್ಲ, ಕಡುಗೋಳು!

ಬಾರಮ್ಮ, ಬಾರೊಮ್ಮೆ ಭಾರತಕೆ ಬಾರ!
ಕತ್ತಲಿಸಿದೆಮಗೆ ಕಂತದ ರವಿಯು ತಾರ!

—ಗೋವಿಂದ ಪೈ

# ಜಯ ಹಿಂದ ಗೀತ

ಇನ್ನು ಹೆರವರ ನೊಗಕೆ ಮಣಿವರಾವಲ್ಲ!
ಜಗದಿ ತಲೆಯೆತ್ತಿ ಹೆಬ್ಬಾಳಲೆದ್ದಿಹೆವು,
ಕಳಕೊಂಡ ಬಿಡುಗಡೆಯ ಮರಳಿ ಗೆದ್ದಪೆವು,
ನಡೆ ಮುಂದೆ, ಹಿಂದವಿನ್ನಡಿಮೆಯನ್ನೊಲ್ಲ!

ನಡೆ ಮುಂದೆ, ಹಿಂದವಿನ್ನಡಿಮೆಯನ್ನೊಲ್ಲ!
ದೇವರೆಮ್ಮಯ ತಂದೆ, ಭಾರತಂ ತಾಯಿ,
ತಾಯ ನೈಸೆರೆ ಬಿಡಿಸಿ, ಬಿಡಿಸದಡೆ ಸಾಯಿ,
ನಡೆ ಮುಂದೆ, ಸಾವಿಗಾವಂಜುವವರಲ್ಲ!

ನಡೆ ಮುಂದೆ, ಸಾವಿಗಾವಂಜುವವರಲ್ಲ!
ಊದಿ ರಣಕಾಳೆಯಂ, ಮೋದಿ ರಣಭೇರಿ,
ಹಗೆಲಿಸಿರಿ ಕೈದುವನುಘೇ ದಿಲ್ಲಿ ಸೇರಿ,
ನಡೆ ಮುಂದೆ, ಸೆಳೆಯಿರೆದುರಾಳಿಯಿಂ ಗೆಲ್ಲ!

ನಡೆ ಮುಂದೆ! ನಡೆ ಮುಂದೆ! ನಡೆ ಮುಂದೆ! ನೈ ನೈ!
ಜಯ ಹಿಂದ! ಜಯ ಹಿಂದ! ಜಯ ಹಿಂದ! ಜೈ ಜೈ!

—ಗೋವಿಂದ ಪೈ.

# ಸ್ವಾತಂತ್ರ್ಯದೇವಿ

[ಧಾಟಿ:- ಝುಂಝುಂ ಬರಸೆ ಬಾದಲವಾ]

ಜಣಜಣ ಗೆಜ್ಜೆ ಮೊಳಗಿಸಿ ಬಾ
ಮುಕ್ತಿಯ ತಾರೆ, ತಾರೆ,
ಸ್ವಾತಂತ್ರ್ಯ ದೇವಿ, ದೇವಿ, ಸ್ವಾತಂತ್ರ್ಯ ದೇವಿ!

ಘೋರ ದಾಸ್ಯ ಶಾಪಕೆ ಕನಿಕರ ತೋರಿಸೆ, ತೋರಿಸ.
ಭಾರತ ದೇಶದ ವಿಪತ್ತ ಪಡೆ ಹೊಡೆದೋಡಿಸೆ, ಓಡಿಸೆ.
ಸ್ವರಣೆ ಕೈ ಮೀರಿಹುದೈ; ಜಗಕಾಗಿ, ಜನಕಾಗಿ
ಮುಕ್ತಿಯ ತಾರೆ, ಬಾರೆ, ಮುಕ್ತಿಯ ತಾಯೆ!
........ಜಣ ಜಣ ಗೆಜ್ಜೆ........

ಅಡಿಮೆಯ ರಕ್ಕಸಿ ಬಿಗಿ ಬಿಗಿ ಬಿಗಿಪ ಶೃಂಖಲೆ, ಶೃಂಖಲೆ,
ಮೂಕ ಮಿಲಿಯಡ ಬಿಡುಗಡೆಗೆಂದೆ ಛೇದಿಸೆ, ಛೇದಿಸೆ.
ಸಾಮ್ಯ ಸುಖವ ನೀ ತಾರೆ, ಸಂಪದ ವಿತರಣ ಸಾರೆ,
ಲೋಕಕೆ ಬೀರೆ ಕ್ರಾಂತಿ! ಕ್ರಾಂತಿಯ ತಾಯೆ!
........ಜಣ ಜಣ ಗೆಜ್ಜೆ........

ಏಕೆ ಸವತಿ ಮತ್ಸರ ನಿನಗೆ? ಬೋಧಿಸೆ, ಬೋಧಿಸೆ,
ಸಕಲ ಲೋಕಕೆ ಸಾಮ್ಯವಾದ; ಮಾತಾಯೆ! ಮಾತಾಯೆ!
ಒಡೆತನದಾಶೆಗೆ ಸಮ್ರಾಟ ಹೊಡಿಹ ಬಡತನ ಕಾಟ!
ಉತ್ಕ್ರಾಂತಿ ತಾರೆ, ತಾಯೆ, ಉತ್ಕ್ರಾಂತಿ ತಾರೆ!
.... ...ಜಣ ಜಣ ಗೆಜ್ಜೆ ... ...

—ದಾಮೋದರ.

# ಓ ತೇಜೋರಾಶಿ

ಉದಯಿಸೀಗ ಓ ತೇಜೋರಾಶಿ
ಭರತಪ್ರಜಾ ಹೃದಯಾಂತರವಾಸಿ

ಕತ್ತಲೆಯನು ಕತ್ತರಿಸುವ ಕಿರಣ
ಮುತ್ತಲಿ ಸಕಲಾವನಿಸಂಚರಣ;
ಮೃತ್ಯುಮುಂಜುಗಳ ಮುತ್ತನು ಮಾಡಿ
ಸತ್ಯದ ತೆನೆಯ ತುರಾಯಿಯ ಸೂಡಿ
ಉದಯಿಸೀಗ ಓ ತೇಜೋರಾಶಿ!

ಹೊತ್ತಿದ ಮಲೆಯಲಿ ಹೊಸ ಚಿಗುರಂತೆ
ಒತ್ತಿದ ಮುಗಿಲಲಿ ಮರಿ ಮಿಂಚಂತೆ
ಮಥನದೊಳೆಗೆದ ಮಹಾಲಕ್ಷ್ಮಿಯಂತೆ
ಪ್ರಥಮ ಯುಗಾದಿ ದಿನೋದಯದಂತೆ
ಉದಯಿಸೀಗ ಓ ತೇಜೋರಾಶಿ!

—ಸೇಡಿಯಾಪು ಕೃಷ್ಣ ಭಟ್ಟ.

# ಸ್ವಾತಂತ್ರ್ಯ ಸೊದೆವೆಣ್ಣು ಪೂರ್ಣಿಮಾ

ಬರುತಿಹಳು ಪೂರ್ಣಿಮಾ, ಭಾರತದ ಬಾನಿನಲಿ
ಬರುತಿಹಳು ಸ್ವಾತಂತ್ರ್ಯ ಜ್ಯೋತ್ಸ್ನೆಯೊಡಗೂಡಿ.
ತರುತಿಹಳು ಶಾಂತಿಯನು, ಸುಖಭದ್ರತೆಯನೆಲ್ಲ
ಸುರಿಸುವಳು ಸೌಭಾಗ್ಯಸುಮವ ಸುಧೆಗೂಡಿ!
ಅಪರ ಸಂಧ್ಯಾ ಸುಂದರಿಯ ತೊಲಗು ತೊಲಗೆಂದು
ಸಪರಿವಾರದಿನೊರೆದು ಬರುತಿಹಳು ನೋಡಿ!

ವಿಪರೀತ ವರ್ತನೆಯ ಕೊನೆಯಾಟವಿದನಿಂದು
ಅಪರೆಯಿಸಗುವಳು; ಕೊನೆಯುಂಟು, ದಿಟ ನೊಡಿ

ರಕ್ತ ವಸನೆಯ ನಾರಿ ಅಪರ ಸಂಧ್ಯಾ ದೇವಿ!
ರಕ್ತ ಬಲಿಯಂ ಕೊಂಡು ಬಂದಿಹಳು ಮುಂದು;
ದಿಕ್ತಟದಿ ಕೆನ್ನೀರ ಬಸಿಬಸಿದು ಕೊಡುತಿಹರು
ನಕ್ತಂಚರಿಗೆ! ಇನಿತು ಸಾಲದೇನಿಂದು?
ಬರುತಿರುವ ಸ್ವಾತಂತ್ರ್ಯ ಸೊದೆವೆಣ್ಣು ಪೂರ್ಣಿಮಾ!
ತರುತಿರುವ ಸುಖಶಾಂತಿಗಳನೇಕೆ ಮರೆತು;
ಇರಿತದಲಿ, ಕೊರಗಿನಲಿ ತಲ್ಲೀನರಾಗುತ್ತ
ಬರಿದಾಗುತಿಹೆವಿಂದು ಬಿಡುಗಡೆಯ ಮರೆತು.
ಅವ ಮುಸಲನಿವ ಹಿಂದುಯೆಂದೆಂಬುದೇತಕ್ಕೆ?
ಅವನಿವನು ನಾವೆಲ್ಲರೊಂದಲ್ಲವೇನು?
ಭಾರತದಿ ಜನಿಸುತ್ತ, ಭಾರತದಿ ಬೆಳೆಯಲ್ಕೆ,
ಭಾರತೀಯರು ನಾವು ಒಂದಲ್ಲವೇನು?
ಇಂದಿನಾ ಭೇದವನು ಕಿತ್ತೊಗೆದು ಬಿಸುಡುತ್ತ
ಒಂದಾಗಿ ಮುಂದಾಗಿ ನಾಡಜನ ಬನ್ನಿ!

ಮಂಗಲವ ಹಾಡುತ್ತ, ಮಂಗಳೆಯ ಸ್ವಾಗತಕೆ
ಹೊಂಗಳಸದಾರತಿಯ ಒಮ್ಮತದಿ ತನ್ನಿ!
ಬರುತಿಹಳು ಪೂರ್ಣಿಮಾ, ಭಾರತದ ಬಾನಿನಲಿ!
ಬರುತಿಹಳು ಸ್ವಾತಂತ್ರ್ಯ ಜ್ಯೋತ್ಸ್ನೆಯೊಡಗೂಡಿ
ತರುತಿಹಳು ಶಾಂತಿಯನು, ಸುಖಭದ್ರತೆಯನೆಲ್ಲ
ಸುರಿಸುವಳು ಸೌಭಾಗ್ಯಸುಮವ ಸುಧೆಗೂಡಿ.

-ಪಿ. ಕೆ. ನಾರಾಯಣ.

## ಒಲ್ಲದ ಕೊಡಿಗೆ

ಒಲ್ಲೆವಿದನಿನ್ನು ಹರಳಡಸಿದೀ ಹಿಡಿತುತ್ತೆ?
ಕೊರಳು ಕರುಳಂ ಬಗಿವ ಬುತ್ತಿ ತಾನಲ್ಲ?
ಕೊಡಿಗೆ ಎನಲೊಂದೆ—'ಆಂಗ್ಲರೆ, ನಡಿರಿ ಈವತ್ತೆ!
ನೀವಿಲ್ಲಿಹನ್ನೆಗಂ ಬಿಡುಗಡೆಮಗಿಲ್ಲ!'

ಒಂದು ಕೆಯ್ಯಿಂದೀ ಉದಾರ(!) ಕೊಡಿಗೆಯ ಕೊಟ್ಟು
ತಾವಿನ್ನು ತೆರಳಲಿಹೆವೆಂದು ತೋರ್ವಂದು
ಮತ್ತೊಂದರಿಂದೆಮ್ಮ ಹಿಂದೆ ಜುಟ್ಟಿಗೆ ಜುಟ್ಟು
ಗಂಟಿಕ್ಕುವೀ ದ್ರೋಹ ಯಾರ್ಗೆ ಹೊಸತಿಂದು?

ಶಶಿಸೂರ್ಯರೆರಡೆ ಹೊರತೆಮ್ಮದೆಂದಾವೊಂದು
ನಮ್ಮ ದೇಶದೊಳಕಟ ನಮಗುಳಿದುದಿಲ್ಲ!
ದೋಚಿದೆಲ್ಲವ ಮರಳಿ ಬಾಚಲಾವಿರುವಂದು
ಹೊನ್ನೆಡೆಗೆ ಹಿತ್ತಾಳೆ? ಛೀ ನಮಗಿದೊಲ್ಲ!

ನಮ್ಮ ಕಾಲಲೆ ನಿತ್ತು ಕಾಲವಂ ಕಡೆವ,
ಬಿಡುಗಡೆಯ ಸೆಳೆವರಂ ದುಡಿವ! ಹೆದ್ದುಡಿವ!

—ಗೋವಿಂದ ಪೈ.

# ಪಡೆವೆ ಸ್ವಾತಂತ್ರ್ಯ

[ಧಾಟಿ: ಆಖಿಯಾ ಮಿಲಾಕೆ]

ಕೂಡಿರೆಲ್ಲ ಬೇಗ
ಹಾಡಿರಿ ಈ ರಾಗ
"ಪಡೆವೆ ಸ್ವಾತಂತ್ರ್ಯ"

ಭಾರತ ದೇಶದಿಂದ
ದಾರಿದ್ರ್ಯ ಓಡಿಸಲೆಂದೆ
ಸರಸರನೆ ಮೂಡಿ ಬಂತೈ
ಹಿರಿದು ಮಿಂಚು— ಈ ಸ್ವಾತಂತ್ರ್ಯ........
ಕೂಡಿರೆಲ್ಲ ಬೇಗ........

ಹಸಿದಿಹ ಜನರಿಗೆ
ಅಶನವ ಕೊಡಿಸಲು
ಸುರಭಿಯ ತಾಯಿ ಬಂತೈ
ಹರಸಿ ಜೀವನ—ಈ ಸ್ವಾತಂತ್ರ್ಯ .......
ಕೂಡಿರೆಲ್ಲ ಬೇಗ .......

ವಸನದ ವ್ಯಸನಕೆ
ಒಸಗೆಯ ಸಾರುತ
ಬಿಡುವಿನ ಚರಕ ಮಂತ್ರ
ಹಾಡಿ ಬಂತೈ —ಈ ಸ್ವಾತಂತ್ರ್ಯ.... ..
ಕೂಡಿರೆಲ್ಲ ಬೇಗ.. .....

# ಇಂದು ಒಂದೇ ತಾಣ

ಇಂದು ಒಂದೇ ತಾಣ ತೆರವಾಗಿ ಕಾದಿರಲು
ಪಕ್ಕ ತಾಣವದೇಕೆ? ಸಿಕ್ಕ ತಾಣವದೇಕೆ?
ಒಕ್ಕೂಟ ಒಮ್ಮನವ ಕದಡಿ ಸಡಿಲಿಸಿ ಬಿಡಲು
ಜಂಜಡದ ಕೇಳ್ಕೆ ಹೇಳ್ಕೆಗಳಿಂದ ಬಿಡುಗಡೆಯೆ?
ನಾವು ನಾವೆನ್ನುವುದು ಚೆಲುವು ಗೆಲುವಿನ ದಾರಿ,
ನಾವು ನೀವೆಂಬ ಇಬ್ಬಗೆಯೆ ಬೇನೆಯ ಮಾರಿ!
ಬಿಡುವಾದರೊಂದಾಗಿ ಬಿಡುಗಡೆಯ ಪಡೆಯೆವೇ?
ಸಿಡಿದು ಬಿದ್ದೊಡನೆ ಸಡುವಲ ಜಾಡೆ ಸೆರೆ ಸಿಕ್ಕು
ಬಿಡದೆಂಬ ಮನವರಿಕೆ ನೆಲೆಯೂರಿ ಬಲಿತಂದು
ಕೆಡೆ ನುಡಿವ ಮುಸಲೀಮು—ಹಿಂದು ಮಾತುಗಳೊಂದು
ಸಂದು ಕದಲಿದ ಮಕ್ಕಳಾಡುಗೊಂಬೆಯ ತೆರದ
ಅತ್ತಿತ್ತ ಚೆದರಿ ಹರಿಮುರಿಯಾಗಿ ಕೆಡೆದಿರದೆ?
ನಡೆ ಮುಂದು ಕಡೆಯೆಡೆಗೆ ಬಿಡುಗಡೆಯ ಬಾಗಿಲಿಗೆ
ಬಿಡುಮಾತು ಪೆಡೆಮಾತು ಸೇಡು ಕಸರಿಕೆ ತಡೆಗೆ.
ಪಕ್ಕತಾಣವು ಬೇಡ, ಸಿಕ್ಕತಾಣವು ಬೇಡ
ಇಂದು ಒಂದೇ ತಾಣ ಬಿಡುಗಡೆಯ ಕಡೆ ನೋಡ

— ಎನ್. ಬಿ.

೨

## ರಣ ಕಹಳೆ

ಕ್ರಾಂತಿಯ ದಿನ
ವೆಂದೊಡೆ ಮನ
ವಾಂತಿಹ ಗೆಲವೆನಿತೊ!
ಒಡಲೊಂದಿಹ ನವಿರೆನಿತೊ!
ತಾಯಿಯ ಸೆರೆ
ಸಾಯಕವುರೆ
ನೋಯಿಸುತಿರೆ ಬರಿದೆ,
“ಪರ! ಕಾಯ್!” ಎಂಬುದು ಪಿರಿದೆ?
ಅರೆನಿದ್ದೆಯು
ತೆರೆ ಬಿದ್ದಿರೆ
ಪರರಿಗೆ ಮಾರಿದರು
ಸ್ವಾತಂತ್ರ್ಯವ ನಮ್ಮವರು.
ಎಂದಾದುದ—
ನಿಂದಿಗೆ ನೆನೆ—
ದಂಬುದರೊಳಗೇನು?
ಸರಿ. ಕಂದೆರೆದಿರೆ ನೀನು!
ತಾಯ್ನಾಡಿನ
ಮೈಮೆಯಸಿರಿ
ಕಾಯುವವರು ನಾವು
ಇದ ತಡೆದವರಿಗೆ ಸಾವು!
ಮರೆತೆರೆಯ, ಹಾ!

ಅರಿಬಲವಾ
ರಿಯು ಕುಡಿದಿಹ ಬಡಬು!
ಹಳೆ ರಜಪೂತರ ಪಡೆಯು!
‘‘ಅಂತಹ ಜನ
ಪಂದಿನ ದಿನ;
ಇಂದೆಲ್ಲಿ ಹರವರು!
ಬಿಡು! ಸಾಗದು’’ ಎನ್ನದಿರು.
ಸಿಡಿ ಗುಂಡಿಗೆ
ಎದೆ ಗುಂಡಿಗೆ
ಪಿಡಿದವರೆನಿತೆನಿತೊ!
ತಾವ್ ಕೆಡದವರನಿತೆನಿತೊ!
ಅಹ! ಅಂದಿಗೆ
ಬಿದಿಯೊಂದಿಗೆ
ಕದನವ ಕರೆದವರು,
ನಿನಗೊದಗಿಸುವರು ನವಿರು!
ಇಂದಿಗು ಇದೆ
ಅಂತಹ ಎದೆ
ಸಂದೇಹವೆ ಬೇಡ!
ಎಳೆ ಮಂದಿಯ ಮೊಗ ನೋಡ!
‘‘ಮಾಡಲ್ಲದೊ
ಡಿಡು ನಿನ್ನಯ
ಜಡತನು’’ ವೆನ್ನುವುದೆ,
ಪಿಡಿ—ನುಡಿಯಿದೆ ರಣ ಕಹಳೆ!

# ಕ್ರಾಂತಿ ದುಂದುಭಿ

[ಧಾಟಿ:-ಏಕ ಕಲೀ ನ[illegible]ಂಕಿ ಪಲಿ]

ಬಿಡುಗಡೆಗೆ, ಬಿಡುಗಡೆಗೆ,
ಗುಡುಗುತ ಮೊರೆಯೊ ಕ್ರಾಂತಿ ದುಂದುಭಿಯೆ!

ಜಗದಗಲದೊಳು ವ್ಯಾಪಿಸಿಹ
ಭುಗಿ ಭುಗಿಲೆನೆ ಹಾ! ಕಾಡಿಸುವ
ಬಡತನದೊಳ ವಡಬಾಗ್ನಿ! ಕರಾಳ
ದಾರಿದ್ರ್ಯದ ಹೊರ ದಾವಾಗ್ನಿ!

ಸರ್ವ ಸಮಾನರು ಹುಟ್ಟಿನಲಿ;
ಗರ್ವದಿ ತಂತ್ರದಿ ಸುಲಿಗೆಯ ನಡೆಸಿ
ಹಿರಿಯವನಾದ ಶ್ರೀಮಂತ!
ಮರೆತನು ಆತ್ಮವ ಕುರುಡಿನಲಿ,
ಕರೆಮೊರುತ ದುಸ್ವಾರ್ಥದಲಿ,
ತೀಗುತ ಪತಿತರ ತುತ್ತಿನಲಿ,
ಭೋಗ ದೀಕ್ಷೆಯ ನಾಂತು.

ಚಳವಳ ಘೋರ, ವಹಿಸೆಲೊ ಧೀರ,
ಹಳೆಕಾಲದ ಕೊಳೆ ತೊಳೆಯೆ
ಹೊಳೆಯುವ ವಿಪ್ಲವ ಸಾಧನವ
ಬಂಡಾಯಕೆ ನೀ ಗುಂಡಾಗು!

—ದಾಮೋದರ

# ನಾಲ್ಕುನೂರು ಮಿಲಿಯ ಧೀರರೆ

ಏಳಿರೇಳಿರೇಳಿರೆಲ್ಲ ನಾಲ್ಕು ನೂರು ಮಿಲಿಯ ಜನರು!
ಒಂದೆ ಶಕ್ತಿ ಒಂದೆ ಯುಕ್ತಿ ಒಂದೆ ಭಕ್ತಿಯುಳ್ಳ ಭಟರು!
ಬಾಳಿ ಬದುಕಿ ಜಗದಿ ಮೆರೆವ ಬುದ್ಧಿಯುಳ್ಳ ಬಲಾಬಲರು!
ಒಂದೆ ಕಂಠದಿಂದ ಕೂಗಿ ನುಗ್ಗಿ ಬರುವ ಕಾಲ ನಟರು!

ಒಂದೆ ಮನದಿ, ಒಂದೆ ಛಲದಿ
ಕೂಡಿಕೊಳ್ಳುತ,
ಒಂದೆ ಬುದ್ಧಿ ಅದುವೆ ಸಿದ್ಧಿ
ನುಡಿದು ಕೊಳ್ಳುತ,
ಕೇಸರಿಗಳ—ತೆರದಿ ರೋಷ
ತಾಳಿ ನೆಗೆಯುತ,
ಒಂದೆ ಕಂಠದಿಂದ ಘೋಷ
'ತೊಲಗಿ' ಎನ್ನುತ,

ಬನ್ನಿ! ಬನ್ನಿ! ನಾಲ್ಕು ನೂರು ಮಿಲಿಯ ಧೀರರೆ!
ತನ್ನಿ ಕೀರ್ತಿ ಭಾರತದಾ ಭಾಗ್ಯಮಣಿಗಳೆ.

ನೂರು ಭೇದವೆಂಬ ವಾದ
ಅಳಿದು ಹೋಗಲಿ
ಧೀರ-ರೆಂಬ ಸೊಲ್ಲು ಜಗದಿ
ಬಾಳಿ ಉಳಿಯಲಿ.
'ವೈರವಿಲ್ಲ, ದ್ವೇಷವಿಲ್ಲ'
ಎನುವ ಘೋಷವು
ಮುಗಿಲ ಮುಟ್ಟಿ, ಬಾನಿನಾಚೆ
ಕೇಳ್ವ ಒಸಗೆಯು

ಮಿಕ್ಕಿ ಬರಲಿ, ಹರುಷ ತರಲಿ
ಬಾಳಿ ಬದುಕಲು
ಸೊಕ್ಕಿ ಮಲೆತ ಹೊರಗಿನವರ
ತಳ್ಳಿ ನೂಕಲು!

ಬನ್ನಿ! ಬನ್ನಿ! ನಾಲ್ಕು ನೂರು ಮಿಲಿಯ ಶೂರರೆ!
ತನ್ನಿ ಕೀರ್ತಿ ಭಾರತದಾ ಭಾಗ್ಯ ಮಣಿಗಳೆ!

ಚಿನ್ನದಂತೆ ಮಿರುಗುತ್ತಿರುವ
ಹೊನ್ನ ನಾಡಿದು!
ಪರರು ನುಗ್ಗಿ ಸೂರೆಗೈದ
ಚೆನ್ನ ನಾಡಿದು!
ಹೊನ್ನ ನಾಡಿನಲ್ಲಿ ನಾವು
ಬನ್ನ ಪಡುವೆವು!
ಅನ್ನವಿಲ್ಲ! ಬಟ್ಟೆಯಿಲ್ಲ!
ನರಳುತಿರುವೆವು!
ನಮ್ಮ ಬಾಳು, ವಿಧವೆ ಗೋಳು–
ಹದದ ಜೋಡಿಯು!
ನಮ್ಮ ದಾಸ್ಯ! ಜಗಕೆ ಹಾಸ್ಯ
ಇದುವೆ ಮಾಯೆಯು!

ನಮ್ಮ ಶಕ್ತಿ ನಮ್ಮ ಮುಕ್ತಿ ಮರಳಿ ಗಳಿಸುವಾ!
ನಮ್ಮ ನಾಡು ನಮ್ಮ ಬೀಡು ಸುಖದಿ ಪಡೆಯುವಾ!

ದೋಚಿ ಬಾಚುತಿರುವ ಖಳರ
ನೂಕಿ ತಳ್ಳುವ
ನಮ್ಮ ಬನ್ನದನ್ನವನ್ನು
ಸುಖದಿ ಉಣ್ಣುವ!

ನಾಲ್ಕು ನೂರು ಮಿಲಿಯ ಭಟರು
ತೋಳು ತಟ್ಟಲು!
ಸ್ವಾತಂತ್ರ್ಯ ಗಳಿಸಿಕೊಳುವ
ಗುರಿಯ ಮುಟ್ಟಲು!
ಒಂದೆ ಶಕ್ತಿ ಒಂದೆ ಭಕ್ತಿ
ಯಿಂದ ನುಗ್ಗಿರಿ
ಸ್ವತಂತ್ರ ಪಡೆದು ಕೊಳುತ
ಮುದದಿ ಬಾಳಿರಿ!
ಒಂದುಗೂಡಿ ಬೇಲಿ ದೂಡಿ
ಎದುರು ಬಂದರೆ!
ನಿಮ್ಮ ತಡೆವರೆಲ್ಲಿ? ಜಗದಿ
ಇಲ್ಲ ತೊಂದರೆ!
ಹಾಗೆ ಬರಲು ನಿಮಗೆ ದಾರಿ
ಜಗವೆ ಬಿಡುವುದು!
ಒಂದೆ ಕೊರಳ ಘೋಷ ಕೇಳಿ
ಜಗವೆ ಮಣಿವುದು!
ಬನ್ನಿ ಮುಂದೆ! ನಾಲ್ಕು ನೂರು ಮಿಲಿಯ ಧೀರರೆ!
ತನ್ನಿ ಕೀರ್ತಿ ಭಾರತಕೆ — ಭಾಗ್ಯ ಮಣಿಗಳೆ.

— ಇದಿನಬ್ಬ

## ತೊಲಗು ಭಾರತದಿಂದ

ತೊಲಗು ಭಾರತದಿಂದ! ಒಡನೆ ನಡೆ ದೂರ!
ಬಲುಹಿನಲಿ ಮೆರೆವ ತವ ಧೂರ್ತದಧಿಕಾರ
ಬಂದಿಹುದು ಸಂದರ್ಭ ಸಹಿಸೆ ಧಿಕ್ಕಾರ!
ಒಂದಾಗಿ ಕೂಗುವೆವು "ತೊಲಗೆಲವೊ ಕ್ರೂರ."

ತೊಳಲಿದೆವು ಬಹುಕಾಲ ದಾಸ್ಯಕೂಪದಲಿ,
ಆಳ್ತನದಿ ಬೆಂಡಾದೆವೈ ಬಳಲಿ ಬಳಲಿ!
ಬಗ್ಗಲಾರೆವು ನೋಡು ಇನ್ನು ಭೀತಿಯಲಿ,
ಹಿಗ್ಗುತ್ತು ಗರ್ಜಿಪೆವು "ಸಾಗು ಶೀಘ್ರದಲಿ"

ಕಿರಣ ಕಾಣುತಿದೆ ಸ್ವರಾಜ್ಯ ರವಿಯುದಯ,
ಹರಿಯದೆಲೆ ಸ್ವಾತಂತ್ರ್ಯ ನಾಗದೆಮ್ಮಭ್ಯುದಯ
ಬತ್ತಲೆಯ ಸುಲಿಗೆಯಲೆ ನೀ ತಳೆದ ಕಲ್ಲೆದೆಯ
ಹೊತ್ತೀಗ ತೊಲಗಾಚೆ, ಸಾಗಿಸೆಲೊ ಬಿಜಯ!

ಆಡಿರುವೆ ಓಕುಳಿಯ ನಮ್ಮ ಸತ್ತರಲಿ
ನಾಡಿ ತುಡಿವುದು ನೋಡು ನಿನ್ನ ಹೊಂಚಿನಲಿ
ಗತಿಗೆಟ್ಟ ತಾಳ್ಮೆ ಕಾದಿಹುದು ರೋಷದಲಿ
ಖತಿಯಿಂದ ನಾರುವೆವು "ಸಾಗು ತೀವ್ರದಲಿ"

ನೀತಿಯಲಿ ಒಪ್ಪುವಿಯೊ ನಮಗೆ ಬಿಡುಗಡೆಯ?
ಇಲ್ಲದೊಡೆ ಸೇರ್ವೆ ಕಾಲಿನ ಗಾಣದೆಡೆಯ!
ಅಡಿಮೆ ಓಡಿಸೆ ನೋಡು ನಮ್ಮ ಮುನ್ನಡೆಯ.
ಬಿಡುಗಡೆಗೆ ಹೊರಟೆವೊ ಓಡೆಲವೊ ಮಡೆಯ

ಕೊಡುವೆಯಾ ಬಿಡುಗಡೆಯ ಕೊಡುಗೆ ಇದೊ ಎಂದು?
ಗೂಢವನು ಅರಿಯವೇ ನಿನ್ನ ಚಕ್ಕಂದ?
ತಡವೆಯಾ ಜನಪದದ ಆಕ್ರೋಶ ಸ್ವಚ್ಛಂದ?
ತಡವರಿಸಿ ಕೆಡುವೆ "ಪಾಳ್ಯವ ಕೇಳು ಮುಂದು"

ವ್ಯರ್ಥ, ಸಾಹಸ ವ್ಯರ್ಥ! ಧೃತಿಯನಣಗಿಸಲು
ಸರ್ವರೂ ಸಿದ್ಧ ಬಂದುದಕೆ ಎದೆಗೊಡಲು!
ಛಲವಾಂತ ಬಲವಾಂತ ರಾಷ್ಟ್ರ ವರ್ಧಿಸಲು
"ತೊಲಗಾಚೆ!" ಬಿಡುವಿಲ್ಲ ಕ್ಷಣ ಒಂದು ಇರಲು!

—ಬ್ರಹ್ಮಾನಂದ

## ಮುನ್ನಡೆ

ಮುಂದಕೆ ಮುಂದಕೆ ಮುಂದಕೆ ನಡೆಯೈ!
ನಂದದ ಕುಂದದ ಅಳುಕದ ಬಳುಕದ
ಆತ್ಮದ ಬಲದಿಂದ.
ಆತ್ಮದ ಧೃತಿಯನು ಸ್ಮೃತಿಯಲಿ ಬೆಳಗಿ,
ಅಂಜಿಕೆ ಪಂಜರ ಸಂಜೆನೆ ತೊಲಗಿ,
ಸಂಶಯ ಕಂಸವ ಧೈರ್ಯದಿ ತೊಡೆದು,
ಹಿಂಸೆಯ ಕ್ರೌರ್ಯವಹಿಂಸೆಯಿಂ ತಡೆದು,
ಕ್ರೋಧದ ಭರವನು ತಾಳ್ಮೆಯಿಂ ಹಿಡಿದು,
ಭೇದದ ಖೇದವ ರೋಧದಿ ಮಿಡಿದು,
ಪ್ರೇಮದ ಸುಧೆಯೊಳೆ ಪಡೆಬಲ ಬೆಳಸಿ
ಹೊಂದಲು ವಿಜಯವನು!
ಮುಂದಕೆ ಮುಂದಕೆ ಮುಂದಕೆ ನಡೆಯೈ
ನಂದದೆ ಕುಂದದೆ ಅಳುಕದೆ ಬಳುಕದೆ
ಪಡೆಯಲು ಸ್ವಾತಂತ್ರ್ಯ.

—ದಾಮೋದರ

# ರಕ್ತ ಮಸಿ!

ಎನ್ನದೆಯ ಬಿಸಿ ರಕ್ತವನೆ ಕುದಿಸಿ ಮಸಿ ಮಾಡಿ
ನಾಂ ಬರೆಯಬಲ್ಲೆನೇ?—ನಾನು ಕವಿಯು!
ವಿಶ್ವಜನನಿಯ ಗರ್ಭ ಮಾತೃಭೂಮಿಯ ಬಸಿರು—
ಹೊತ್ತುತಿದೆ! ಹೇಳಲಿನ್ನಾವಪರಿಯು?

ಜನರ ನಾಯಕರೆನಿಸಿ, ಜಗದ ನಾಯಕರೆನಿಸಿ,
ಸಾಮ್ರಾಜ್ಯ ಸರ್ವಾಧಿಕಾರಗಳ ಬಯಸಿ—
ಬಡತಾಯಿ ಮಕ್ಕಳನು ಬಲಿಗೊಡುವ ಮೂರ್ಖರನು
ಮುರಿವ ಲೇಖನಿ ಬೇಕು—ರಕ್ತವದಕೆ ಮಸಿ!

ಸ್ವಾತಂತ್ರ್ಯ ಸ್ವಾತಂತ್ರ್ಯ ಸ್ವಾತಂತ್ರ್ಯ ಸ್ವಾತಂತ್ರ್ಯ
ಮೂರಕ್ಷರದೊಳೇನು ಮಾಟವಿಹುದೊ?
ಸ್ವಾತಂತ್ರ್ಯ ಯಜ್ಞದಲಿ ಬಲಿಗೊಂಡ ಬಂಧುಗಳ
ನುತಿಪ ಲೇಖನಿ ಬೇಕು—ರಕ್ತವದಕೆ ಮಸಿ!

ಪರತಂತ್ರ ರಾಷ್ಟ್ರದಲಿ ಮಾತೃ ಭೂಮಿಯ ಸೇವೆ
ಮಾಡಿದ 'ಮಹಾ ಪಾಪಕಾಗಿ' ಶಿಲುಬೆ—
ಏರಿದ ಹುತಾತ್ಮರಾ ನೆನಪು ಕಿಡಿ ಸಿಡಿಯಲ್ಕೆ—
ಕುದಿವ ಲೇಖನಿ ಬೇಕು; ರಕ್ತವದಕೆ ಮಸಿ!

ಲಾಥಿ ಪನ್ನೀರೆಂದು, ಸಿಡಿಗುಂಡೆ ಹೂವೆಂದು,
ಸೆರೆಮನೆಯೆ ಸ್ವರ್ಗಸುಖವೆಂದು ಬಗೆದ
ಭಾರತದ ವೀರ ಸತ್ಯಾಗ್ರಹಿಗಳಿತಿಹಾಸ
ಬರೆವ ಲೇಖನಿ ಬೇಕು—ರಕ್ತವದಕೆ ಮಸಿ!

ಎನ್ನ ಹೃದಯದ ಸ್ಫೂರ್ತಿಯೆನ್ನ ಜನತೆಯ ಶಕ್ತಿ
ಎನ್ನ ನಾಡಿನ ಕೀರ್ತಿ ಹಬ್ಬಿಸಲ್ಕೆ;
ಎಮ್ಮೊಂದಿಗರ ಬದುಕ ಬಾಳಾಗಿ ಬೆಳಗಿಸಲು—
ಬಲಿತ ಲೇಖನಿ ಬೇಕು; ರಕ್ತವದಕೆ ಮಸಿ!

ಶ್ರಮ ಜೀವಿಗಳ ಬೆವರು ಕಂಬನಿ ರಕುತಗಳಲಿ
ತೊಯ್ದು ಸಂಪತ್ತಿನ ಸುಖೋಪ ಭೋಗದಲಿ,
ಮೆರೆಯುವ ಮದಾಂಧರಸು ಲೋಕ ಕಂಟಕರನ್ನು
ತಿವಿವ ಲೇಖನಿ ಬೇಕು ರಕ್ತವದಕೆ ಮಸಿ!

ಸಂಕಷ್ಟ ಸಾವಿರದಿ; ಸಂದೇಹ ಸಂಕುಲದಿ,
ಕಂಗೆಟ್ಟುಮುಂಬಟ್ಟೆ ಕಾಣದಿರಲು
ಮುತ್ತಿರುವ ಕತ್ತಲೆಯ ಕಿತ್ತು, ಸೂರ್ಯೋದಯದ
ತೋರ್ವ ಲೇಖನಿ ಬೇಕು; ರಕ್ತವದಕೆ ಮಸಿ!

ಹಳೆ ಜಗದ ನೀತಿಗಳು, ಕೊಳೆ ಜನರ ರೀತಿಗಳು
ಕಶ್ಮಲ ವಿಚಾರಗಳು ಕೊಚ್ಚಿ ಹೋಗಿ!
ಹೊಸ ಜಗದ ನವ ಸೃಷ್ಟಿಯಾಗಲ್ಕೆ ನೆರವಪ್ಪ—
ಮಸೆಪ ಲೇಖನಿ ಬೇಕು ರಕ್ತವದಕೆ ಮಸಿ!

ಬಡವ ಬಲ್ಲಿದನೆನುವ, ಕೀಳುಮೇಲೆಂದೆನುವ
ಹೊಲೆಯ ಬ್ರಾಹ್ಮಣನೆನುವ, ಬಿಳಿಕರಿಯನೆನುವ;
ವಿಷಮ ವಿಷಮಯ ಸಮಾಜದ ಬೇರ ಕಿತ್ತೊಗೆಯೆ
ಕೊಡಲಿ ಲೇಖನಿ ಬೇಕು—ರಕ್ತವದಕೆ ಮಸಿ!

—ಕಯ್ಯಾರ ಕಿಞ್ಞಣ್ಣ ರೈ

## ಕ್ರಾಂತಿಗಾಗಲಿ ಜಯವು

ಕ್ರಾಂತಿಗಾಗಲಿ ಜಯವು! ಕ್ರಾಂತಿಗಾಗಲಿ ಜಯವು!
ಜನವೆಲ್ಲ ಒಂದೆಂಬ ಸಂಕ್ರಾಂತಿ ನಿಂದು

ಬಡತನದಿ ದುಡಿವವನು, ಸಿರಿತನದಿ ತಿಂಬವನು,
ಕುಲಹೀನ ಕುಲಜನೆಂದೆಂಬುದಿದು ಅಳಿದು
ವರ್ಗ ಕುಲ ಭೇದವಳಿಯುತ್ತಲೀ ಭೂಮಿಯಲಿ
ಸ್ವರ್ಗ ಸುಖ ಸಂಪತ್ತು ಸಮಭಾವ ಬೆಳೆದು,
ಕ್ರಾಂತಿಗಾಗಲಿ ಜಯವು!

ಆಳಿನಾ ದೀನತೆಯು, ಒಡೆಯನಾ ಕ್ರೂರತೆಯು,
ಸಿರಿತನದ ಕಾಮಾಂಧ ಮುನಿಸೆಲ್ಲ ಅಳಿದು
ಆಳಿನಾ ಮಾನ್ಯತೆಯು, ಒಡೆಯನಾ ದಾನತೆಯು
ಕೆಳೆತನದ ಸುಖ ಸಮತೆಯೆಲ್ಲೆಲ್ಲು ಬೆಳೆದು,
ಕ್ರಾಂತಿಗಾಗಲಿ ಜಯವು!

ವ್ಯಾಪಾರ ವ್ಯವಹಾರವೆಲ್ಲೆಲ್ಲು ಸ್ವಾರ್ಥದಿಂ
ಭಂಡಾರ ಬೆಳೆಸುತಿಹ ರೂಢಿಯಳಿದಳಿದು,
ವ್ಯಾಪಾರ ವ್ಯವಹಾರವೆಲ್ಲೆಲ್ಲು ತ್ಯಾಗದಲಿ
ಸೋದರತೆ ಬೆಳೆಯುತಿಹ ರೂಢಿ ಬೆಳೆಬೆಳೆದು,
ಕ್ರಾಂತಿಗಾಗಲಿ ಜಯವು!

ಬಿಜ್ಜೆಯಿಂ ಬಲಿತಿರುವ, ಕಜ್ಜವನು ಮಾಡದಿಹ,
ಬಿಜ್ಜೆವಳರೆಂದೆಂಬ ನಂಜುತನವಳಿದು ।
ಬಿಜ್ಜೆಯಿಂ ಗೆಲಿದಿರುವ ಕಜ್ಜವನು ಮಾಡುತಿಹ
ಜಜ್ಜೆವಳರೆಂದೆಂಬ ನಮ್ರತನ ಬೆಳೆದು,
ಕ್ರಾಂತಿಗಾಗಲಿ ಜಯವು!

ಸಿರಿವಂತ ಸಿರಿಹೀನ, ಸುಖವಂತ ಸುಖಹೀನ
ಸ್ವಾರ್ಥಿಯಿವ ತ್ಯಾಗಿಯಿವನೆಂಬುದಿದು ಅಳಿದು,
ಸಿರಿಯಲ್ಲಿ ಸುಖದಲ್ಲಿ ತ್ಯಾಗದಲಿ ಸ್ವಾರ್ಥದಲಿ
ಸಿರಿ ಸಮತೆ, ಸುಖ ಸಮತೆ, ಚಿರ ಸಮತೆ ಬೆಳೆದು
ಕ್ರಾಂತಿಗಾಗಲಿ ಜಯವು!

—ಪಿ. ಕೆ. ನಾರಾಯಣ

## ಭಾರತ ಮಾತಾ

ವಂದೇ ವಂದೇ ಭಾರತ ಮಾತಾ!
ಜಾತಿ ವಿಭೇದವು ಕಲ್ಪಿತ ಮಾತ್ರ.
ಒಂದೇ ತಾಯಿಯು ಮಕ್ಕಳ ಕೂಟ.
ಮಾತೆಯ ಸೇವೆಯ ತಪ್ಪದೆ ಗೈವ,
ಹಿಂದೂ ಮುಸಲಿಂ ಸಿಖಜನರೆಲ್ಲ
ಸಮಸ್ತ ಪ್ರಜೆಗಳ ಸಮತಾ ಕೂಟ. ವಂದೇ ವಂದೇ ..

ಸಹೋದರ! ಸಹೋದರ!
ದೀಕ್ಷೆಯ ತೊಡು ಬೇಗ!
ದೇಶ ಸ್ವತಂತ್ರಕೆ ಜೀವಿವನೀಯಲು
ಧೂರ್ತ ಸರ್ಕಾರವನಟ್ಟಲು ಶೀಘ್ರ!
ಬಡಜನ ಸೇವೆಯ ಮುಕ್ತಿಯ ಸಾಧನ,
ಪ್ರತಿಜ್ಞೆ ಸಾಗಿಸಲೆಂಬೀ ಧೃತಿಯ. ವಂದೇ ವಂದೇ....

## ಸಾಗಿತು ಭೂತ

ನಾಗಿತು, ನಾಗಿತು ಸಾಗಿತು ಭೂತ
ಹೋಗುತ, ಹೋಗುತ ತಾಳಿತು ರೂಪ!
ರೂಪವು ಭೈರವ ಘೋರ ಗಭೀರ
ಉಪಟಳ ಗೋಪ್ಯ ಸಂಕಟವಪಾರ! ಸಾಗಿತು ಭೂತ!

ಸಪ್ತಸಾಗರವನದಟೆನಿಂ ದಾಂಟಿ,
ಗುಪ್ತ ಖಂಡಗಳೆ ಭುಕ್ತಿಗೆ ಬೇಂಟೆ,
ಬಲಿ ಬಲಿ ಬಯಸುತ ಬಯಕೆಯ ಹೆಚ್ಚುತ
ಮಲೆ ನೇಮುಕೆಂಪೆ ನಲಿಯುತ ನಲಿಯುತ! ನಾಗಿತು ಭೂತ!

ಬಣ್ಣಬಣ್ಣದಾ ಅಣಿಗೆಯ ಕಟ್ಟಿ,
ಕಣ್ಣನು ಕೆರಳಿಸಿ ಹೊರಳಿಸಿ ದಿಟ್ಟೆ,
ಗೆಜ್ಜೆಯ ಮೊಳಗಿಸಿ ಲಜ್ಜೆಯ ನುಳಿದು,
ಸಜ್ಜನರೆಲ್ಲರ ಉಜ್ಜುಗ ತುಳಿದು ಸಾಗಿತು ಭೂತ!

ಸುಳ್ಳಿನ ಕಳ್ಳಿನ ಗಡಿಗೆಯ ಹೊತ್ತು,
ಕಳ್ಳಿನ ಮದವದು ನೆತ್ತಿಗೆ ಹತ್ತಿ,
ಅಮಲಿನ ನೋಂಕನು ಸುತ್ತಲು ಬೀರಿ,
ಚರಮ ನೃತ್ಯವನೆ ದಿಮಿ ದಿಮಿ ಹಾರಿ, ಸಾಗಿತು ಭೂತ!

ಸ್ವಾರ್ಥದ ಬೊಟ್ಟನು ಹಣೆಯೊಳಗಿಟ್ಟು,
ಅರ್ಥವಾದದ ಹೊಸ ನುಡಿಗಟ್ಟು!
ಯಂತ್ರತಂತ್ರದಾ ಪಡಿಬಲ ವೆರಸಿ
ರೋಮ ರೋಮದಲಿ ನಂಜನು ಸೂಸಿ, ನಾಗಿತು ಭೂತ!

ಕೈತವ ಕೋಲನೆ ಕೈಯಲಿ ಹಿಡಿದು,
ಭೀತಿಯ ಪಂಜನು ಎದೆಯಲಿ ಮುಡಿದು,
ಕಲಕಲ ಗೈಯುತ ಪೀಡೆಯ ಪಥದಿ
ಹೊಲೆ ಹೊಳೆ ಮಾಡುತ ಧರ್ಮದ ಜಗದಿ. ಸಾಗಿತು ಭೂತ!

ರಾಜ್ಯ ರಾಜ್ಯಗಳ ಮನೆಮನೆ ನುಗ್ಗಿ,
ಬಂಡವಾಳಿಗಿದು ಹಿರಿಹಿರಿ ಸುಗ್ಗಿ!
ಬೇನೆ ಬರಗಳ ಹಬ್ಬಿಸಿ ತಬ್ಬಿಸಿ,
ದೀನ ದೈನ್ಯರ ವ್ರಣಗಳ ನೆಕ್ಕಿಸಿ! ಸಾಗಿತು ಭೂತ!

ಪರಿಪರಿ ತತ್ವದ ಅಗುಳುಗಳುಂಟು,
ಅರಗದೆ ನುಂಗಿದ ಸತ್ತೆಗಳೆಂಟು!
ಹೊಸಗಾಲಕೆ ಬಿಸಿ ಬಿಸಿ ಒಸಗೆ ಇದೆಂದು
ಹುಸಿ ಹುಸಿ ಹರಸುತ ಸಾಗಿತು ಮುಂದು. ಸಾಗಿತು ಭೂತ!

ಕೆರಳಿಸಿ ಹೊಸ ಹಳೆ ಪ್ರೇತಗಳನ್ನು,
ಮೆರೆಯಿಸಿ ನಾಶದ ಸೂತ್ರಗಳನ್ನು,
ಭೂತ ಪ್ರೇತಗಳ ಮೇಳದ ಕಾಳಗ
ಭೂತಳದೆಲ್ಲೆ ಎಲ್ಲೆಗಳ ನುಗ್ಗಿ.... ... ಸಾಗಿತು ಭೂತ!

ಎಂತಿದು ಆರ್ಭಟ! ಎಂತಿದು ಅಬ್ಬರ!
ಅಂತಿಮ ಕಾಲದ ತಾಂಡವದಣಕವೆ?
ಹುಮ್ಮಸ ದುಬ್ಬಸದಿಂದಲೆ ಈ ರಣಕೇಳಿ
ಸಾಯುವ ಭೂತದ ಹೆಸರನು ಹೇಳಿ. ಸಾಗಿತು ಭೂತ!

— ದಾಮೋದರ.

## ಭಾರತದುನ್ನತಿಗೇಳ್

ಎಲ್ಲಿದೆ ನಿನ್ನಯ ಹಿಂದಣ ವೈಭವ?
ಇಲ್ಲಿಗೆ ಸಾಲದೆ ಇನ್ನೂ ಪರಿಭವ?
ನಲ್ಮೆಯ ಬಾಳನು ಕಡಿಕಡಿ ದಿಕ್ಕುವ,
ಒಮ್ಮನ ಸೂತ್ರದ ಪಾಠವ ಕೆಡಿಸುವ,
ಪರಜನರೊಂದಿಗೆ ಸೇರುತೆ ನಡೆಯುವ,
ದೂರ ಸಿರಿಯಾಳ್ತನ ಕೊಡಲನು ತಳ್ಳುವ,
ಕರ್ಮಕೆ ನಡೆವೆಯೊ ಹೇಳು
ಉಮ್ಮಳ ಗೊಳಿಪೆಯೊ ಹೇಳು
ಕೂರ್ಮೆಯ ಗಳಿವೆಯೊ ಹೇಳು.

ದೆಸೆ ದೆಸೆ ಕೇಳದೆ ಹಾ ಹಾ ಕಾರದ
ಹಸಿವಿನ ರೋದನೆ? ಮನುಜನ ಮಾನದ
ವಸನದ ಯಾಚನೆ, ಠಾವೇ ಇಲ್ಲದ
ಜನರಾಕ್ರಂದನೆ, ಜಗವೇ ಬನ್ನದ
ಉಸಿರನು ತುಂಬಿದೆ, ದಾಸ್ಯದ ತೊಡವಿದೆ
ಜಸವಿದೊ ಹೋಯಿತು, ಮನೆಯನು ಮುತ್ತಿದ
ಶತ್ರುವ ತಳ್ಳಲು ಹೊರಡೊ,
ಬನ್ನವ ಕಳೆಯಲು ಹೊರಡೊ,
ಉನ್ನತಿಗೊಳ್ಳಲು ಹೊರಡೊ!

ಬಹು ಧರ್ಮಕಾಶ್ರಯ ಹಿಂದುಸ್ಥಾನ.
ಬಹುಸತ್ವ ಸಹಿತ ರಾಜಾಸ್ಥಾನ
ಬಹುರುಚಿರ ಭಾಷೆಗಳ ಸಂಸ್ಥಾನ
ಬಹು ಕವಿವರ್ಯರ ಪೂಜಾ ಸ್ಥಾನ
ಹಿಂದು ಬೌದ್ಧ ಮುಸ್ಲೀಮ ಸಿಕ್ಖರನ
ವರತರ ಪೂಜಾ ಮಂದಿರ ಸುಖಧನ

ಕಾವುದು ಭಾರತ ನಾಡು.
ಇಂದೇಂ ಕ್ರಾಂತಿಯ ಬೀಡು.
ಇಂತಿರಲಪ್ಪುದೆ ನೋಡು! ॥ ૩ ॥

ರಾಜ್ಯದ ಬಳವಿಯ ಮತವೇಂ ತಡೆವುದೆ?
ರಾಜ್ಯದ ಶಾಸನ ನೀತಿಯ ಬಿಡುವುದೆ?
ಉಜ್ವಲ ಬೋಧೆಯು ಧರ್ಮಾದಿ ನೆಲೆದಿಡೆ
ಸತ್ಯ ವರ್ತನೆಯೊಳೆಲ್ಲರ ಮೆಟ್ಟಿದೆ
ಹಿಂಸೆಯ ಬಿಟ್ಟರೆ ಎಲ್ಲಿಯು ಸುಖವಿಡೆ
ಮರ್ತ್ಯತೆ ಮೈತ್ರಿಯ ಪಾಠದಿ ನಿಂದಿದೆ
ಆವುದು ಬೇಕಿದೆ ಹೇಳು
ಆವುದು ಧರ್ಮವು ಹೇಳು
ಭಾರತದುನ್ನತಿಗೇಳು ॥ ೪ ॥

— ಎಮ್. ಸುಬ್ರಾಯನ್

## ಜಯ ಘೋಷ

ಜಗದೆಲ್ಲ ದಲಿತರೊಗ್ಗೊರಳಿನುಗ್ಗಡಣೆಯಿದು;
ನಲುವತ್ತು ಕೋಟಿ ಕೊರಳುಗಳ ಉದ್ಘೋಷ!
ಜಗದಲ್ಲಿ ಸ್ವಾತಂತ್ರ್ಯ ಸೌಹಾರ್ದ ನೆಲೆಗೊಳಿಪ
ನವಯುಗವದ್ವೈತರುವ ಮಧುರ ಜಯ ಘೋಷ!

—ಪಿ. ಕೆ. ನಾರಾಯಣ

# ಭಾರತಾಂಬೆಯ ಮಹಿಮೆ

ಭಾರತವನುಳಿಯುತ್ತ ನನಗೆ ಜೀವನವೆತ್ತ?
ಭಾರತವೆ ನನ್ನುಸಿರು, ನನ್ನೊಗೆದ ಬಸಿರು.
ಭಾರತವೆ ಧನಧಾನ್ಯ, ಭಾರತವೆ ಮನೆಮಾನ್ಯ,
ಭಾರತವೆ ದೇವಾರವೆನ್ನ ಸಂಸಾರ.

ಭಾರತದ ನೆಲಹೊಲವು ಸುರಭಿಯಿಳಿಕೆಚ್ಚಲವು,
ಭಾರತದ ತಿಳಿಜಳವು ಸೊದೆಯ ಸವಿ ಸೆಳವು,
ಭಾರತದ ಶ್ಯಾಮಲತೆ ತನುಮನಕ ಕಾಮಲತೆ,
ಭಾರತದ ಪಶುಪಕ್ಷಿ ವೈಚಿತ್ರ್ಯ ಸಾಕ್ಷಿ.

ಭಾರತದ ಸಕ್ಕದವು ಜ್ಞಾನನಿಧಿಯೊಕ್ಕವವು,
ಭಾರತದ ಹಲ ಮಾತೆ ಮೇಳವದ ಗೀತೆ;
ಭಾರತದ ಶುಭ ಚರಿತ ಧರೆಗೆ ಧರ್ಮದ ಕರೆತ,
ಭಾರತದ ತೋಳ್ಕೈಗಿಲು ಹಗೆಯ ಬಗೆದಿಗಿಲು.

ಭಾರತೀಯ ಸ್ವತಂತ್ರ ಸಾಧನವೆ ನಿಜಮಂತ್ರ,
ಭಾರತದ ಜಯಮೂರ್ತಿ ಮನ್ಮನಃಪೂರ್ತಿ,
ಭಾರತದ ಸೋದರಿಕೆ ನನ್ನ ದಿನದಿನದೆರಕ,
ಭಾರತ ಯಶೋಗಾನವೆನ್ನೆದೆಯ ತಾನ.

ಭಾರತದ ಮಂಗಲವು ಭುವನವಲ್ಲಭನೊಲವು,
ಭಾರತದ ಸಮುಚ್ಛ್ರಯವು ಶಾಂತಿಗಾಶ್ರಯವು;
ಭಾರತದ ಜನಕುಲವು ಭುವಿಯ ಬಳಗಕೆ ಬಲವು,
ಭಾರತಾಂಬೆಯ ಭಕ್ತಿ ನನಗಾತ್ಮಶಕ್ತಿ.

—ಗೋವಿಂದ ಪೈ

# ಐಕ್ಯ ಮಂತ್ರ

[ಧಾಟಿ:—ಭಾರತಾಂಬೆ ನಮ್ಮ ಮಾತೆ]

ಭಾರತೀಯರೆಲ್ಲ, ನಾವು ಒಂದುಗೂಡಿ ಬಾಳುವ
ಒಂದುಗೂಡಿ ಬಾಳಿ ನಮ್ಮ ಕುಂದು ಕೊರತೆ ಕಳೆಯುವ

ಸಕಲ ಜೀವರಾಶಿಗಳಲಿ ದೇವನನ್ನು ಕಾಣುವ
ಕುಲದಿ ಜನಿಸಿ ಹಿಂದುವಾಗಿ ಬಂಧುಗಳಲಿ ಭೇದವ
ತಳೆಯ ಬಹುದೆ ವೈರವ? ........ . .ಭಾರತೀಯರೆಲ್ಲ .......

ಅಲ್ಲಿ ಇಲ್ಲಿ ಎಲ್ಲಕಡೆಯಲಲ್ಲನಿರುವನೆಂಬುವ
ಸೊಲ್ಲನೊಲಿವ ಮಹಮದೀಯ ಸೋದರರೊಳು ಸ್ನೇಹವ
ಬೆಸಯದಿಹುದೆ ಐಕ್ಯವ? .. . . ಭಾರತೀಯರೆಲ್ಲ .. ...

ಹೊಡೆಯಲೆಡದ ಕೆನ್ನೆಗೊಡನೆ ಬಲದ ಕೆನ್ನೆ ತೋರಿದ
ಯೇಸು ಕುಲದ ಕ್ರೈಸ್ತನಿರಲು ಬಂಧುಗಳಲಿ ದೋಷವ
ಕಾಂಬುದೇನು ಮೋಸವ? ....... ..ಭಾರತೀಯರೆಲ್ಲ .. ...

ಹರಿಯನಂಬಿ ಹಿಂದುವಿರಲಿ ಮಹಮ್ಮದೀಯಲಲ್ಲನ
ಕ್ರೈಸ್ತನಂಬಲೇಸುವನ್ನು ಎಲ್ಲರೊಬ್ಬನೆನ್ನುವ
ಭಿನ್ನಭಾವ ಮರೆಯುವ. ....... ..ಭಾರತೀಯರೆಲ್ಲ ... ...

—ಎಡಂರ್ಕಳ ಶಂಭು ಭಟ್ಟ

# ಗೆಲುವೇ ಸಿದ್ಧ

ತೊತ್ತಿನ ಬಾಳು
ತುತ್ತಿನ ಗೋಳು
ಕಿಡಿಯನು ಕಾರಿ
ಜ್ವಾಲೆಯ ಬೀರಿ
ನಿಂತಿದೆ ನೋಡಿ!

ಬಿದ್ದಿಹ ಜೀವ
ಒದೆಯುತ ಸಾವ
ಶಕ್ತಿಯ ಕೂಡಿ
ಮುಕ್ತಿಯ ನೋಡಿ
ನಿಂತಿದೆ ನೋಡಿ!

ಬಿಡುಗಡೆ ಮಂತ್ರ
ಅಹಿಂಸೆ ತಂತ್ರ
ಕೂಡಿದ ಯಂತ್ರ
ಸಾಗೆ ನಿರಂತರ
ತಡೆವುದಸಾಧ್ಯ!
ಬಿಡುಗಡೆ ಸಾಧ್ಯ!
ಗೆಲುವೇ ಸಿದ್ಧ!

- ಪಿ. ಕೆ. ನಾರಾಯಣ

# ೩೫೦೦,೦೦೦

(೧೯೪೩ನೆಯ ಇಸವಿಯ ಕೊನೆಯ ೪ ತಿಂಗಳಲ್ಲಿ ಬಂಗಾಲದಲ್ಲಿ ಕ್ಷಾಮಕ್ಕೂ ರೋಗಕ್ಕೂ ತುತ್ತಾದವರನ್ನು ಕುರಿತು)

ಸತ್ತರೇ ಅಕಟ ಮೂವತ್ತಯಿದು ಲಕ್ಷ
ಬಂಗಾಲದೊಳಗೆಮ್ಮ ಕಂಗಾಲ ಬಳಗಂ!
ಬೋನದಾ ದುರ್ಭಿಕ್ಷ, ಬೇನೆಯ ಸುಭಿಕ್ಷ—
ಕರು ಉಂಡಿತೇ ಹಾಲು ತುರು ಹಿಂಡೆ ಕೊಳಗಂ?

ಇಳೆ ಭಾರವನ್ನಿಂತೆ ಇಳುಹುದೆನೆ ತನ್ನ,
ಹೌರಕ್ಕೆ ಹೌರ ಗಡ ಭಾರತರೊ ಭಾರ?
ವಡಬಾಗ್ನಿಯಿಂ ತನ್ನ ಕಡಲಿಗೆನೆ ಬನ್ನ,
ಯೂರೋಪದೌರ್ವದಿಂ ಭಾರತಕೊ ಘೋರ?

ಯಾರ ಸೊಕ್ಕಿಗೆ, ದೇವ, ಯಾರ ತಲೆ ದಂಡ?
ನಾಲದೆನೆ ನಮ್ಮ ಏಗಾಲದೀ ಅಡಿಮೆ
ಮತ್ತೆ ಲೋಕದ ಪಾಪ ಹೊತ್ತ ಕುರಿವಿಂಡ
ಬೇನೆ ಬರ ಮುಕ್ಕೆ ಇನ್ನೇನೆಮಗೆ ಕಡಿಮೆ?

ಇನಿಸೆ ಭಾಗ್ಯಕೆ, ಜೀಯ, ಜನಿಸಿದೆವೆ ನಾವು?—
ಕೂಳಿದ್ದು ಉಪವಾಸ, ಬಾಳಿದ್ದು ಸಾವು!

—ಗೋವಿಂದ ಪೈ.

# ಮಾತೆಯೆಡೆಗೆ

ನಮ್ಮ ಜನರ ಕೂಗ ಕೇಳಿ!
ಕೇಳಿ ಹೊಲಸು ಕೇರಿಯಿಂದ;
ಕೇಳಿ ಮುರುಕು ಗುಡಿಸಲಿಂದ,
ಕೇಳಿ ತುಳಿದ ಜನಗಳಿಂದ,
ನೊಂದ ಹೃದಯದಾಳದಿಂದ ಕೇಳದೆ?

ನಮ್ಮ ಬಾಳ ಬವಣೆ ನೋಡಿ !
ನೋಡಿ ದುಡಿದ ಬೆವರಿಸಿಂದ,
ನೋಡಿ ಸುರಿದ ರಕ್ತದಿಂದ,
ನೋಡಿ ಸಾವ ದವಡೆಯಿಂದ,
ಅನ್ನ ದೇವ ಪೂಜೆಯಿಂದ ನೋಡರೆ?

ನಮ್ಮ ನಾಡ ಪಾಡು ತಿಳಿಯು!
ತಿಳಿದು ಬಿಗಿದ ಬೇಡಿಯಿಂದ,
ತಿಳಿದು ದಾಸ್ಯ ಭಾರದಿಂದ,
ತಿಳಿದ ಶಾಂತಿ ನೆಲೆಸಿನಿಂದ,
ಬಂಧನದಾ ಬೇಗೆಯಿನ್ನು ತಿಳಿಯದೆ?

ಕೇಳಿ, ನೋಡಿ, ತಿಳಿದು ಬನ್ನಿ!
ಬನ್ನಿ, ನಾಡೊಳೊಂದುಗೂಡಿ,
ಬನ್ನಿ, ಪಾರತಂತ್ರ್ಯ ದೂಡಿ,
ಬನ್ನಿ, ಶಾಂತಿ ಸಮರ ಹೂಡಿ,
ಎದೆಯ ನೀಡಿ
ಬಲಿಯನಿತ್ತು
ಮಾತೆಯೆಡೆಗೆ ಬನ್ನಿರಿ!

— ಸುರೇಶ.

# ಗೋಳಿನ ಬಾಳು

| ಧಾಟಿ: ದಿನ ಖೂನ್ ಕೆ ಹಮಾರಾ |

ಗೋಳಿನ ಬಾಳು ನಮ್ಮದು;
ಹಾಳಾದುದೆಮ್ಮ ಜನ್ಮ.
ಬಾಳಿನೊಳಿಲ್ಲವಿಲ್ಲ
ವೊಳಿವಾರೆಯಾದಿ ಮೂಲ!

ಕರುಣಾಮಯನೆ ನೀ ದೇವ!
ತಿರೆ ಯೊಡೆಯನೆ ನೀ
ಸರಿ ಸಮತೆಯಿಲ್ಲದೇಕ
ಸುರಿದಿಹೆಯೋ ನಿನ್ನ ಕೃಪೆಯಾ!

ಒಂದೆಡೆಯೊಳದೇಕ.
ಗೊಂದಲದ ಭೋಗರಾಶಿ!
ಮುಂದೇಕೆ ಎಮಗೆ ಸುರಿದಿಹೆಯೊ!
ತೊಂದರೆಯ ಭಾರಿ ನೆರೆಯಾ!

ಹೊರಿಸುವರು ಎಲ್ಲ ಭಾರ
ಸರಿಯಾಗಿ ವರಿಗಣಿಪರೆಮ್ಮ
ಕರಕನ್ನವಿಲ್ಲ ಉಣಲು
ಇರಲಿಲ್ಲ ಮುರುಕು ಮನೆಯು

ನೆತ್ತರ ಕುದಿನುಸಿದರು
ವೇತನವು ದೊರಕದೆಮಗೆ.
ಕತ್ತೆಯ ಬಾಳ್ವೆ ನಮ್ಮದು.
ಸತ್ತೇವು ನಾವು ಬದುಕಿ.

# ಈ ಮಹಾಯುದ್ಧದ ನಿಜವೀರರು

ಜಗದಗಲ ಧಗಧಗಿಸುವೀ ಸಮರದಲ್ಲಿ
ಲಕ್ಷಶಃ ಸಾಯೆ, ಲಕ್ಷಾಂತರಂ ಸೀಯೆ,
ಹಸಿವೆ ಬೇನೆಯಿನಿನ್ನೆನಿತೊ ಲಕ್ಷ ಬೀಯೆ,
ನಿಜವೀರರಾರಂತೆ ಈ ಅಮರರಲ್ಲಿ?

ಗೆಲವೆ ವೀರತೆಯಲ್ಲ. ಅನ್ಯರದನೆಲ್ಲಾ
ಕಸಿಯೆ ಕಾದಿಸುವ, ಕಾದುವ ವೀರರಲ್ಲ.
ಒತ್ತಿ ಬರೆ ತನ್ನಿಳೆಗೆ ಕಾದಲಾರೊಲ್ಲ?
ಪರರ ಬಿಡುಗಡೆಗೆ ಮಡಿದಾ ವೀರರಿಲ್ಲಾ?

ತಮಗೆ ಬಿಡುಗಡೆ ಇಲ್ಲ, ಪರರವಂ ಕಾಯೆ
ತಮ್ಮದಲ್ಲದ ರಣದೊಳೆಲ್ಲೆಲ್ಲಿ ಕಾದಿ
ಮಡಿದ, ಮೇಣಾನ್ಯರಿಗೆ ತಮ್ಮ ತುತ್ತೀಯೆ
ಹಸಿದಿಲ್ಲಿ ಕೆಡೆದ, ಹಿಂದೀಯರೋಪಾದಿ
ಯಾರಿಲ್ಲವಾ ಭಾರತರಗಣ್ಯ ಕೋಟಿ
ಈ ರಣದ ನಿಜವೀರತೆಯ ಪುಣ್ಯಕೋಟಿ!

—ಗೋವಿಂದ ಪೈ

# ಪಥವನು ಬೆಳಗಿಸೆಲ್ಲೈ

[ಥಾಟ: ಆಶ ನಿರಾಶ ಭಯಿ]

ಪಥವನು ಬೆಳಗಿಸೆಲ್ಲೈ! ಪರೋಕ್ಷಾ
ಜ್ಯೋತಿ ದಯಾನಿಧಿಯೆ.

ಪ್ರವಾಸ ಹಾ! ಘನ ಘೋರ ಕಠಿಣ,
ರಾತ್ರಿ ಭಯಾನಕ, ಗೃಹ ಅಜ್ಞಾತ.
ರವಿ ಪ್ರಕಾಶದೆ ಜಗದೊಳ್ ಮೆರೆದೆ
ಪ್ರಜ್ಞೆಯ ನುಳಿಯುತಲೆ. ಪರೋಕ್ಷಾ!
ಪಥವನು ಬೆಳಗಿಸೆಲ್ಲೈ!

ಮರೆತೆನು ನಾನು ನಿನ್ನಯ ಧ್ಯಾನ,
ಇರುವೆನೀಗ ಕಡು ಕತ್ತಲೆಯೊಳ್
ಅಜ್ಞಾನ ಮಾಂಧ್ಯ ಅಂಧತೆಗಳ ಕ್ಷಮಿಸಿ
ಪಾರ ಪಡಿಸೈ ಜ್ಯೋತಿ ಪರೋಕ್ಷಾ!
ಪಥವನು ಬೆಳಗಿಸೆಲ್ಲೈ!

ಮರೆಯಾಗಿರುವ ಆ ಸೂರ್ಯನು ಬಾರೆ
ಮಮ ಆತ್ಮಕೆ ನೀ ನಿಜ ಧ್ರುವ ತಾರೆ
ಸಮ್ಮತವೈ! ಅಡಿಯೊಂದೇ ಮುಂದೆ
ಆಶೆ ಸಂದೇಹ ವಿನಾ! ಪರೋಕ್ಷಾ!
ಪಥವನು ಬೆಳಗಿಸೆಲ್ಲೈ!

--ದಾಮೋದರ

# ಯಾರೆಂಬರು ಮುಗಿದುವೆಂದು ಬವರಂ?

**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ ।**
**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥** (ಗೀತಾ ೨.೩೭)

ಯಾರೆಂಬರು ಮುಗಿದುವೆಂದು ಬವರಂ?
ನಂಬದಿರದು ಮರುಳರ ಮಾತೆ:
ನರನಿನ್ನೆವರಂ ನರನನ್ನೆವರಂ
ರಣಾಂಗಣವೆ ಶಾಂತಿಯ ಮಾತೆ!
ಶಾಂತಿಯೆ ನಿನ್ನಯ ಸಾಧನವಾಗೆ
ಸನ್ನದ್ಧವಿರು ಯುದ್ಧಕೆ ಸಾಗೆ.

ಯುದ್ಧವಿಲ್ಲದಭಿವೃದ್ಧಿಯದುಂಟೆ?
ಯುದ್ಧದೆ ಮನುಜತೆಯ ವಿಕಾಸಂ—
ಬೆಂಕಿಯೊಳಲ್ಲದೆ ಕಬ್ಬಿಣ ದಾಂಟೆ
ಯಂತ್ರ ತಂತ್ರ ಶಕ್ತಿಯ ಸಾಸಂ?
ಯೋಧನಾದ ನರನಮರನವಾಸಂ,
ಯೋಧನೆಂಬೆ ಸೃಷ್ಟಿಯ ಯಜಮಾನಂ.

ಕಟ್ಟಳೆಯೊಳ್ ಹಳಸಿದ ಬಾಳುವೆಗೆ
ಯುದ್ಧದಿ ನವಯೌವನ ಸಿದ್ಧಿ;
ಪರವಶತೆಗೆ ನಾಚದ ತಾಳುವೆಗೆ
ಯುದ್ಧದೊಳಾ ಪಾಪದ ಶುದ್ಧಿ;
ಯುದ್ಧವೆ ಮೃತಜೀವನದುತ್ಥಾನಂ,
ಯುದ್ಧವೆ ಉತ್ಕ್ರಾಂತಿಯ ಸೋಪಾನಂ.

ನರತೆಯೊಂದ ನರನಾದಡನೇಕಂ,
ಏಕಾರ್ಥದ ಮಂದಿಯು ಜನತ;
ಜನತ ಜನತೆಯೊಳಗಿರದು ವಿವೇಕಂ—
ಸ್ವಾರ್ಥಕಲ್ಲವಲ್ಲವೆ ಜನತೆ?
ಸ್ವಾರ್ಥತೆ ಪರಾರ್ಥದಲಿ ಕೆಯ್ಮಾಡ
ಸಂಗರವಾ ಪ್ರಸಭವನೀಡಾಡೆ

ಸರ್ವಜೀವಿಗಳೊಳೊರ್ವನೆ ಮನುಜಂ
ಪರಹಿತ ಗೆಯಲೆಂದೊಗೆತಂದು,
ತನ್ನ ಹಂಗನವಮನ್ನಿಸಿ ದನುಜಂ
ತಾನೆನೆ ಪರರಲಿ ಮಲೆವಂದು,
ಕೇಸುರಿ ಬಲೆಯಾ ಕೇಸರಿಗೆಂತೊ
ಸಮರವಾತನಂ ಕಮರಿಸಲಂತು

ಸಾಲದು ನರಜನ್ಮವ ಬರಿದೆತ್ತ—
ಜನ್ಮಮಾತ್ರವೇತರ ಕಾರ್ಯಂ?
ನರನಹೆಯಾ? ಮಡಿ ನರತೆಯು ಮತ್ತ—
ದ್ವಿಜನಾಗದ ಮನುಜನನಾರ್ಯಂ!
ಪರರಳಲಿನ ಪರಿಹರಿಕಗೆ ನಂದು
ಹೊಸ ಬಾಳೆತ್ತಿದವನೆ ದ್ವಿಜನಿಂದು.

ಅನ್ಯನಲ್ಲ, ನೀನೆ ನನ್ನ ಯೋಧಂ!
ಕಾದೆನಲಾ ಪ್ರಕೃತಿಯೆ ನಿನಗೆ.
ಕಟ್ಟಾಜ್ಞೆಯಡಕ ತಟ್ಟ ವಿರೋಧಂ
ಎಲ್ಲಿನೆಲ್ಲಿಗುರುಳಿದೆ ಕೊನೆಗೆ!
ಕತ್ತಿಗೆ ಬಾರದ ಕಬ್ಬಿಣ ಬಾಗಿ
ಮುಟ್ಟುವುದನುದಿನ ಸಟ್ಟುಗವಾಗಿ

ಅಳಿವೆಯೊ? ಉಳಿವೆಯೊ? ಪ್ರಶ್ನೆಯನಿತ್ತೆ—
        ಮೂರನೆಯದಿಲ್ಲ ನಿನಗಾಯು.
ಕಾದದಡೆ ಸಾವಿಗವುತಣವಿತ್ತೆ
        ಕಾದೆ ನಡೆದೆ ಸಾವನೆ ಸಾಯು!
ಪ್ರಬಲರಬಲರಂ ಕಬಲಿಸೆ, ಹಗೆಯಾ
ಕಾದೊ ಕಾದದೆಯೊ ಬದುಕುವೆ, ಬಗೆಯಾ!

ಕಾದೆ ಸಾವೆನೆಂದಕಟಾ ಗಾಸಿಯೊ?
        ಕಾದದವರಿಗಿಲ್ಲವೆ ಸಾಯೆ?
ಕತ್ತಿಯಾಗಿ ಹಾಯೆ ಸಾಯೆ ವಾಸಿಯೊ?
        ನಾಲದಂತ ಕಾಲಲಿ ತೇಯೆ?
ಸಾವಿಗಂಜೆ ಸಾವಿರ ಸಲ ಸತ್ತೆ,
ಸಾವನಂಜದವನೊಮ್ಮೆಯೆ ಸತ್ತ.

ಕಾದೆ ಸಾವನೆಂದಲ್ಲಿಗೆ ಸರಿಯು,
        ಬಾಳ್ವೆ ಸಾವಿನೊಳೆ ನೆರವೇರೆ?
ಬಾಳ್ವೆ ಬಾಳತಕ್ಕುದೊ ನಾನರಿಯೆ,
        ಸಾವು ಸಾಯತಕ್ಕುದು ನೇರೆ!
ಧರ್ಮಯುದ್ಧವೊಂದಲ್ಲದೆ ಬೇರೆ
ದಾರಿಯೆ ವೀರಸ್ವರ್ಗವನೇರೆ?

ಸೆರೆಗೇಕಂಜುವೆ? ಸೆರೆಯಾಳಲ್ಲವ
        ತನ್ನ ಮನೆಯೊಳಸ್ವರ ತೊತ್ತು?
ಸಿಕ್ಕ ಮಡೆಯು ಮುಕ್ಕುವ ಗಿಳಿ ಬಲ್ಲವೆ
        ಗೂಡೊ ಬೀಡೊ ಎನುವಾ ಗೊತ್ತು?
ಬಸುರಲಿ ಸೋಸಿಲ್ಲವೆ ನೀ ಸೆರೆಯಾ?
ಹೊಸ ಹುಟ್ಟಿನ ಬಸಿರಾ ಸೆರೆಯುರಿಯಾ!

ತನ್ನ ಕಡುಕನ್ನೆಲ್ಲ ಮುನ್ನ ಕಾದು,
ತಾಯಿಳೆಯ ಬಿಡುಗಡೆಗೆ ಕಾದು,
ನರತೆಯ ಸರಿಸೋದರತೆಗೆ ಕಾದು,
ಮನುಜನ ವಿಮೋಚನೆಗೆ ಕಾದು.
ಪ್ರಸತೆ ಭವಿಷ್ಯದ ನೊಸಯಿಸಿ ಕಾದು,
ಬದಿಕಿದೊಂದು ಕೂಳುಗುಳವೆನೆ ಕಾದು.

ನೀನಜರಾಮರನಹೆಯಾ? ಕಾದು—
ನರರಿಗೆ ಪೆರತಮರತೆಯೊಳವೆ?
ಕಂಚೊ ಕಲ್ಲೊ ಕತೆ ಕವಿತೆಯೊ ಕಾದು
ನಿನ್ನನುಳಿಸೆ ನಿನಗಿನ್ನುಳಿವೆ?
ಗೆದ್ದರೆ ಹೊಸ ಹೊತ್ತೆದ್ದುದು ಮುಂದೆ.
ಬಿದ್ದರೆ ನೇಸರಿನುದ್ದಕೆ ನಿಂದೆ!

ನಿನಗೆ ಕಾದೆನುವೆನಿದೊ ಧರ್ಮರಣಂ,
ಪರಾಕ್ರಮಣವದು ರಣವಲ್ಲ,
ಪರರ ಬಿಡುವಿನಪಹರಣವೆ ಮರಣಂ—
ಬಿಡುವ ತುಡುಕಿ ಕೆಡದವರಿಲ್ಲ.
ಬಿಡುಗಡೆ ಎನೆ ಜನಜನತೆಯ ಸೊತ್ತು,
ಕಳೆವನು ಸೆಳೆವನು ನಿಯತಿಯ ತುತ್ತು.

ಸಗ್ಗದಿಂದ ಸೋನೆಯಂತೆ ಸುರಿಯದು,
ಬಿಡುಗಡೆ ಗಡ ಬಾರದು ಬರಿದೆ!
ಕಾಯ್ಪೊಡೆಯಗೆ ಬರಿ ಬಾಯ್ಪಡೆ ದೊರೆಯದು—
ಕಾದದ ಕೈಯ್ಗಿಂದಿಗುಮರಿದೆ!
ದುಡಿಯದೆ ಪಡೆದಾ ಬಿಡುಗಡೆಯಲ್ಲ—
ರಣಹೇಡಿಗೆ ದೇವರ ನೆರವಿಲ್ಲ.

ಆಯುಧವಿಲ್ಲೆಂದೆದೆಗೆಡಬೇಡ--
ಯೋಧನೆತ್ತಲಿತ್ತಲಿ ಕತ್ತಿ!
ಸಾಧಕನೆ ತನ್ನ ಸಾಧನ, ನೋಡ!
ಹೇಡಿ ಏವನಾಯುಧವೆತ್ತಿ?
ಮನದೊರೆಯಲಿ ನಿನಗನುವಹ ಸಿರಿಯ
ಹೊತ್ತು ಕಾವ ಬಗೆಗತ್ತಿಯು ಹಿರಿಯ!

ನೆರವಿಗೆ ಯಾರೆಂದೇತಕೆ ಖಿನ್ನ?
ಕಾದಿಸುವೊಡೆಯನ್ ಜತೆಗಿಲ್ಲ?
ಎಂದಿಸಿಂದ ಕಾದವನಿದೊ! ನಿನ್ನ
ಸುಳಿದು ತಾನೆ ಕಾಯುವನಲ್ಲ!
ಕಂಡಿನೆದೆಯನಿಡು ಗಂಡದಿ ಮುಂದೆ
ನೂಕು ರವೀಂದು ಪತಾಕೆಯ ಹಿಂದೆ

ಕೇಳದೆ ಜಗದೀ ಗೋಳಿನ ಕಾಳ?
ಕಳಕಳಿಸದೆ ನಿನ್ನೆದೆಯಗಾರ?
ನಾಳೆ ಎಂಬ ಜಡಗೆಂದಿಗು ನಾಳ.
ಬಂದೆನೆಂಬ ಕುದುರೆಗೆ ಹಾರ!
ನಟ್ಟನೆ ರಣರಂಗದಿ ಮುಂಬರಿಯೊ,
ಜಯ ಶಾಂತಿ ಎಂದಶಾಂತಿಯುಸಿರಿಯಾ!

— ಗೋವಿಂದ ಪೈ.

## ರೈತನ ಬಿಟ್ಟರೆ ಕೆಟ್ಟಿತು ಜಗವು

ರೈತನ ಬಿಟ್ಟರೆ ಕಟ್ಟಿತು ಜಗವು!
ಸಾಗದು ಜೀವನ ಧರೆಯೊಳಗೆ.
ಮತಿಯನು ಉಳಿಯುತ ರೈತನ ಪಾಡನು
ಪತನಪಥದಲಿ ದಬ್ಬಿದೊಡೆ,
ದೇಶದ ಏಳ್ಗೆಯು ಸಾಧಿಪುದೆ?
ದಾಸ್ಯದ ಶೃಂಖಲೆ ಮುರಿಯುವುದೆ?

ನೇಗಿಲ ಯೋಗಿಯ ಪರ್ಣಕುಟೀರದಿ
ಪುಷ್ಟಿಯು ದನಕರು ಇಲ್ಲದೊಡೆ,
ರಾಗದಿಂದಲವು "ಅಂಬಾ" ಎಂದು,
ತುಷ್ಟಿಯು ಸೂಚನೆ ಮಾಡದೊಡೆ,
ದೇಶಕಲ್ಯಾಣವು ಮೂಡುವುದೆ?
ಸೌಭಾಗ್ಯದ ರವಿ ಏರುವನೆ?

ರವಿಯ ಉದಯದಲಿ, ಭುವಿಯ ಗೆಲುವಿನಲಿ,
ಹಚ್ಚನೆ ಪೈರದು ಹೆಚ್ಚುತಲಿ
ಹೊಲಗದ್ದೆಗಳಲಿ ತಲೆಯ ತೂಗದೊಡೆ
ಸೃಷ್ಟಿ ದೇವಿಗಿದು ನೈಜತೆಯೆ?
ಪ್ರಕೃತಿಯ ಸೊಬಗಿನ ಪೂರ್ಣತೆಯೆ?

ಲೋಕದ ಕಣಜವ ಸಾರ್ಥಕಗೊಳಿಸಲು
ಪಾರ್ಥಿವ ನೆನಿಸಿಹ ರೈತನು ತಾ
ಜೋಕೆಯಿಂದಲೆ ಗೈಮೆಯನೆಸುಗುವ
ಮೈ ಮೈ ಮುರಿಯುತ ದಿನ ರಾತ್ರಿ.

ಇಂತಹ ಕೃತಗೆ ಆದರವಿರದಿರೆ
ಕೊರಗಳಿ, ಕುಸಿಯಳಿ ಭೂಮಾತೆ!

ಒಡ್ಡೆ ಬಟ್ಟೆಯೊಳು ಗಡ್ಡೆಯೊಳಿದ್ದು
ಸಡ್ಡೇಳುವುದಾತನ ಕೊರಳಿಸಲಿ
ಏಳದೆ ಬಾಳ್ವೆಯು ರಣರವ ಮೊರೆಯುವುದೆ?
ವೀರ ರಕ್ತವದು ಕುದಿಯುವುದೆ?
ಧೀರ ಶೌರ್ಯವು ಬಿರಿಯುವುದೆ?

—ದಾಮೋದರ.

## ಸನಿಯುವ್ವೈ ಸಾಮ್ಯ ಸ್ವರಾಜ್ಯ

(ಧಾಟಿ:—ತುವಿ. ಚಲೇ ಸಂದೇಶ್)

ಉಫೆ ಕಿಸಾನರೇ, ಜೈ, ಮಜೂರರೆ ,ಜೈ!
ಓ ಪ್ರೀತಿಯ ಜನರೇ!
ಸನಿಯುವ್ವೈ ಸಾಮ್ಯ ಸ್ವರಾಜ್ಯ.

ಹಾ ಸಂತಸ ಸಂಪದ ಸಂತುಷ್ಟಿ,
ಸೌಹಾರ್ದದಿ ಹಕ್ಕು ಸಮುಷ್ಟಿ,
ವರ ಸಮಾಜ, ಹೇಳಿರಿ, ಸಾಧ್ಯ,
ಇದು ಆರಾಧ್ಯ.
ಸನಿಯುವ್ವೈ ಸಾಮ್ಯ ಸ್ವರಾಜ್ಯ

ಭಂಡ್ವಾಳದ ದ್ರೋಹ ಕಾಣೆಯ್ಯೆ!
ಭಂಡಾಯವು ಕರೆವುದು ಜಯ ಜೈ!
ತುಂಡಾದರು ಹಿಂದಾಗೆವು ನಾವ್
ದಂಡಿನ ಜನರು.
ಸನಿಯುವ್ವೈ ನಾಮ್ಯ ಸ್ವರಾಜ್ಯ.

—ದಾಮೋದರ.

# ಪರದೇಶಿ ರಾಜರ ನಾಟಕವಾಯ್ತು

[ಧಾಟಿ:—ಪರದೇಶಿ ಬಾಲಮಾ ಬಾದಲ ಆಯ]

ಪರದೇಶಿ ರಾಜರಾ
ನಾಟಕವಾಯ್ತು ಹಾ!
ಏಳಿ ಇನ್ನು ರಾಜ್ಯ ಎಮಗಾಯ್ತು
ಆಶ ಫಲವಾಯ್ತು!

ಒಂದಾಗಿ ಮುಂದೆ ಬನ್ನಿ
ವೀರ ಜವಾನರೇ,
ಹೇ ಕಿಸಾನರೇ!

ಇಂದೀಗ ನಾರಿ ಧರೆಗೆ
ದಿವ್ಯ ಸಂದೇಶವಾ,
ಸಂದೇಶವಾ!

ಹಿರಿದಾದ ಭಾಗ್ಯ ತಿರಿಗಿ ಬಂತು,
—ಹೋದ—ಜೀವ ಬಂತು!

ಇಂದೇ ನಾವ್ ಸಾರಬೇಕು
ಶಾಂತಿಯ ಮಂತ್ರವಾ,
ವರ ಮಂತ್ರವಾ!

ಮುಂದೆ ನಾವ್ ಬಾಳಬೇಕು
ಸೊಗದ ಜೀವನವಾ,
ಜೀವನವಾ!

ಹಿರಿದಾದ ಹಕ್ಕು ನಮ್ಮದಾಯ್ತು
—ದಾಸ್ಯ ಬಿಟ್ಟು ಹೋಯ್ತು

ಚಂದದಿಂ ಕೂಡಿರೆಲ್ಲಾ
ಮೈತ್ರಿಯ ಪಾಶದಿ,
ಘನ ಪಾಶದಿ!

ಹಿಂದೂ ಮುಸ್ಲೀಮರೆಂಬ
ಭೇದ ಅಳಿಯಲಿ,
ಮರೆಯಾಗಲಿ,

ಅವಿಭಾಜ್ಯ ದೇಶ ನಮ್ಮದಾಯ್ತು!
ಭೇದ ಹರಿದ್ಹೋಯ್ತು.

—ಬಿ. ವಿ. ಬಾಳಿಗ.

# ದೇವನ ನೆಲೆ

ಸಾಕು ಬಿಡು ನಿನ್ನಯ ಗಾನ ಸ್ತೋತ್ರ!
ಏಕೆ ನಿನಗಾ ಜಪ ಮಣಿಯ ಹಾರ?
ಏಕಾಂತ ದೇಗುಲದ ಕತ್ತಲಿನ ಕೋಣೆಯಲಿ
ಸಕಲ ಕದಗಳ ಮುಚ್ಚಿ ಸಿಂಭಜಿಪುದಾರ ನೆಲೆ?
ತೆರೆ ನಿನ್ನ ಕಂಗಳನು — ನೋಡು!
ಇರನು ನಿನ್ನಯ ದೇವ ಸನ್ನಿದಿರು!

ಇಹನವನಲ್ಲಿ ಉಳುವ ರೈತನೊಕ್ಕಲು
ಸಹಿಸಿ ಕಠಿನತೆ ನೆಲ ಕುತ್ತಿ ಉಳುತಿಹಲ್ಲಿ.
ಇಹನವನಲ್ಲಿ ಗೈವ ಹಾದಿ ಹದನದ ಕೂಲಿ

ಬಹ ಕಲ್ಲ ಬಂಡೆಯಾ ಹುಡಿಮಾಡುವಲ್ಲಿ.
ಬಿಸಿಲು ಮಳೆಗಳಲಿ ಇಹನವರೊಡನೆ ಕಲೆತು;
ಮಾಸಿಹುದವನ ಉಡಿಗ ಧೂಳಿಯಾ ಮಲೆತು.
ತ್ಯಜಿಸಲವೊ ನಿನ್ನಯಾ ಪೂಜ್ಯ ಪೀತಾಂಬರವ
ನಾಜದಿಂ ಇಳಿ ಕೆಳಗೆ ಅವನಂತೆ ಧೂಳಿನಾ ನೆಲಕೆ.

ವಿಮೋಚನೆಯೆ? ತೋರಲಿ ಅರಸುತಿರ್ದೆಯಾ,
ವಿಮೋಚನೆಯು ಇಹುದೆಲ್ಲೆಂಬ ಪರಿಯು;
ನಮ್ಮೊಡೆಯ ತಾನವನು ಹೊತ್ತಿಹನು ಸರ್ವ
ಸಮ್ಮತಿಯಿಂ ಸೃಷ್ಟಿಯಾ ಬಂಧಗಳನೆಲ್ಲಾ
ನೆಮ್ಮದಿಯಿಂ ನಮ್ಮೊಡನವ ಸ್ಥಿರ ಬಂಧಿಯಲಾ!

ತೊಲಗೆಲವೊ ನಿನ್ನ ಧ್ಯಾನ ಧಾರಣದಿಂ
ಕೆಲದಲಿಹ ಧೂಪ ಪುಷ್ಪಾದಿಗಳ ಎಸೆದು.
ದೋಷವಿರದೈ ನಿನ್ನ ಬಟ್ಟೆ ಹರಕು,
—ಹೊಲಸಾದೊಡೇನು!
ದರ್ಶಿಸವನನು ನಿಜಗೈಮೆಯಲಿ,
ಬೆವರಿನಾ ತೊಟ್ಟಿನಲಿ!

"ಗೀತಾಂಜಲಿ"ಯಿಂದ

# ಕನ್ನಡ ಮಾತೆ

ಧಾಟಿ: ದೇವಿ ಭುವನ ಮನ ಮೋಹಿನಿ

ಮಾತೆ, ವಿಮಲ ಗುಣ ಶೋಭಿತೆ
ಕನ್ನಡ ಭುವನೇಶ್ವರಿ, ಸುಖದಾತೆ
ನಮಿಪೆವು ನುತಚರಿತೆ.

ಗಿರಿದರಿಗಳ ಹೊಲಗಳ ಬೆಡಗಿಂದೆ
ತರುಲತೆಗಳ ಸುಮಗಳ ಸೊಬಗಿಂದೆ
ಹರಿವ ನದೀನದಗಳ ಬಿಣ್ಪಿಂದೆ
ತಿರೆಯ ತಿಲಕದೊಳ್ ಶೋಭಿಸೆ.

ಗುಡಿ ಗೋಪುರ ದೇಗುಲಗಳ ಪೆಂಪು,
ನಿಡು ಕರಗಳ ವಿಗ್ರಹಗಳಲಂಪು,
ಅರಮನೆ ನೆಲಮನೆಗಳ ಕಡು ಸೊಂಪು,
ಪೊಣ್ಮಿರೆ ಬಿಡಯದೆ ರಾಜಿಸೆ!

ಕವಿಗಳು ಗಮಕಿಗಳುರ ಚಿತ್ರಕರು,
ರೂವಾರಿಗಳದಟಿನ ಬಲಯುತರು,
ನೃಪ ಶ್ರೇಷ್ಠರು, ಸಚಿವರು, ಧೀಯುತರು
ಎಸೆಯಲೆಸಕದೆ ವಿರಾಜಿಸೆ!

ಜನನೀ, ನಿನ್ನನು ಜಾನಿಸಿ ನುತಿಸಿ,
ಸೇವಿಪ ಭಾಗ್ಯವಕರುಣಿಸು ಹರಸಿ,
ಕನ್ನಡ ಮಂತ್ರವ ಚಿತ್ತದಿ ನಿಲಿಸಿ,
ಬಾಳನು ಬೆಳಗಿಸು ಸಂತತ!

—ಜಿ. ಎನ್. ಲಕ್ಷ್ಮಣ ಪೈ

## ಉದ್ಘೋಷ

ದಿಕ್ತಟವ ಬಿರಿಯುತ್ತ,
ಭೂಗರ್ಭ ಸೀಳುತ್ತ,
ಘೀಳಿಡುವ ಆರ್ಭಟವಿದೇನು? ಏನು!
ಶ್ರಮ ಜೀವಿಗಳ ಬೆಮರು
ತೊಟ್ಟಿಕ್ಕಿ, ಹನಿಗೂಡಿ,
ದುಃಖ ಸಾಗರವಾಗಿ ಘೋರ್ಗರೆವುದೇನು!

ಅಕ್ರಮದ ವಿಷವೇರಿ,
ಗರಿಗೆದರಿ, ಬಾಯ್ಬತ್ತಿ,
ಜನಗರೆದ ಕಂಬನಿಯ ಜೋಗ ಮೊರೆ ಏನು!
ಸುಲಿಗೆಗಿಚ್ಚಿಲಿ ಬತ್ತಿ,
ಹಬೆಯಾಗಿ, ಉಗಿಯಾಗಿ,
ಛಲದಿ ಬಗೆವೆತ್ತ ಮೇಘ ಗರ್ಜನೆಯೇನು? ಏನು!

ದುಡಿದುಡಿದು ಕಡಿಯಾದ
ಬಡ ಜನರ ನೆತ್ತರದು
ಕಡುಗೆಂಪು ಮೋಡವಾಗಿಹುದೇನು? ಏನು!
ಚೆಮ್ಮೋಡವಂಬರದಿ,
ತಡೆಯದೆಲೆ ಪಡೆಯಾಗಿ,
ಗುಡುಗುಡುಗುವುದೆ? ಕೋಲ್ಮಿಂಚದೇನು? ಏನು!

ನೆತ್ತರಿನ ಹರಿಹೊನಲು;
ಜನಧೃತಿಯೆ ಏರಳಲು!
ಕೆನ್ನೀರ ಮುನ್ನೀರ ಉಬ್ಬರವದೇನು?
ದಾಸ್ಯವನು ಮುಳುಗಿಸುತ,
ದಾರಿದ್ರ್ಯ ಕೊಳೆ ತೊಳೆವ
ಮುಂಬಾಳ ಹೊಸ ಹುರುಪ ಮೊಳಗೇನು? ಏನು!

ಸುಲಿಗೆಯಡಿಗಲ್ಲಿಟ್ಟು,
ಸ್ಥಾಪಿಸಿದ ಹಕ್ಕುಗಳ
ಬಿತ್ತರದ ಕೊತ್ತಲವ ಕುಸಿಪ ರವವೇನು?
ಹಳೆಯದನು ತೊಳೆದೊಗೆದು
ಹೊಸವೆನಕ ಹೊಸೆದೆಸೆವ
ಸಂಕ್ರಾಂತಿ! ವೈಷಮ್ಯ ನೀಗುಪ ನೆರೆಯೇನು!
ಮಂಗಳದ ಮುಂಗಾರು!
ಹೊಂಬಾಳ ಮುಂಬೆಳಕು
ಚೆಂಬಣ್ಣವೈ! ಭಯವೇಕೆ? ತಿಳಿಯದೇನು?
ಕ್ರಾಂತಿ ನಸನವ ತೊಟ್ಟು,
ಶಾಂತಿಯಾ ಬೊಟ್ಟಿಟ್ಟು,
ಭ್ರಾಂತಿ ರೊಚ್ಚೆಯ ಕೊಚ್ಚಿ,
ತ್ಯಾಗವೆಲ್ಲವ ಮೆಚ್ಚಿ,
ಆಡುತಲಿ ನವ ಕೇಳಿ,
ವಿಪ್ಲವದ ತೆರ ತಾಳಿ,
ಬರುತಿಹಳು ಉಚ್ಚಳಿಸಿ,
ಜನಪದದ ಗೋಳಳಿಸಿ!
ನಮ್ಮಮ್ಮ ಬರುತಿಹಳು,
ಸಮತೆ ಸುಖ ತರುತಿಹಳು,
ಸೊಗಸು ಸುಗ್ಗಿಯು ಬೀರಿ,
ಸಂದೇಶ ಶುಭ ಸಾರಿ!
ಅಬ್ಬರಿಪ ಉದ್ಘೋಷ!
ಬಡುಗಡೆಯೇನು! ಸಿಡಿಲೆ!
ಹೊಸ ಯುಗದ ಮಕ್ಕಳೆ!
'ಜೈ' ಯೆನ್ನಿ! ಪಡಿ ಘೋಷ!
ಹೊಸ ಬಾಳಿನ ಒಕ್ಕಲೆ!
ಕಾರ ಸೊನೆ ಪೀಯೂಷ!
ತಳೆಯುತಲಿ ಆವೇಶ,
ನಡೆ! ಸಾರುತುದ್ಘೋಷ.

—ದಾಮೋದರ.

## ಪಟ್ಟಿ